# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ

ಒಂಬತ್ತನೇ ಅಧಿವೇಶನ

(ಮುಂದುವರೆದ ಉಪವೇಶನಗಳು)

## ಕಾರ್ಯಕಲಾಪಗಳ ಪಟ್ಟಿ

ಸೋಮವಾರ, ದಿನಾಂಕ 21ನೇ ಮಾರ್ಚ್, 2016

(ಸಮಯ: ಬೆಳಗ್ಗೆ 11.00 ಗಂಟೆ)

------

### 1.ಸಂತಾಪ ಸೂಚನೆ

### 2.ಪ್ರಶ್ನೋತ್ತರ

**ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಐದನೇ ಪಟ್ಟಿ**

**ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಐದನೇ ಪಟ್ಟಿ**

### 3.ವಿತ್ತೀಯ ಕಾರ್ಯಕಲಾಪಗಳು

"2016-17ನೇ ಸಾಲಿನ ಆಯವ್ಯಯ ಅಂದಾಜುಗಳ ಮೇಲೆ ಸಾಮಾನ್ಯ ಚರ್ಚೆ".

### 4.ಶಾಸನ ರಚನೆ

**I. ವಿಧೇಯಕಗಳನ್ನು ಹಿಂಪಡೆಯುವುದು**

1. **ಕರ್ನಾಟಕ ಕಾಕಂಬಿ ನಿಯಂತ್ರಣ ವಿಧೇಯಕ, 2014.**
**ಶ್ರೀ ಮನೋಹರ್ ಹೆಚ್. ತಹಶೀಲ್ದಾರ್ (ಅಬಕಾರಿ ಮತ್ತು ಮುಜರಾಯಿ ಸಚಿವರು) ಅವರು:-**

2014ನೇ ಸಾಲಿನ ಕರ್ನಾಟಕ ಕಾಕಂಬಿ ನಿಯಂತ್ರಣ ವಿಧೇಯಕವನ್ನು ಹಿಂಪಡೆಯಲು ಅನುಮತಿ ಕೋರುವುದು.

........2

## 5.ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಕೆ.ಆರ್. ರಮೇಶ್ ಕುಮಾರ್** ಅವರು – ಶ್ರೀನಿವಾಸಪುರ ಪಟ್ಟಣಕ್ಕೆ ಬೈಪಾಸ್ ರಸ್ತೆ ನಿರ್ಮಿಸಲು ಅನುಮೋದನೆಯಾಗಿದ್ದರೂ ಈವರೆವಿಗೂ ನಿರ್ಮಾಣ ಕಾಮಗಾರಿಗಳನ್ನು ಆರಂಭಿಸದಿರುವ ಬಗ್ಗೆ ಮಾನ್ಯ ಲೋಕೋಪಯೋಗಿ ಸಚಿವರ ಗಮನ ಸೆಳೆಯುವುದು.
2. **ಶ್ರೀ ಜಿ.ಹೆಚ್. ಶ್ರೀನಿವಾಸ್** ಅವರು ತರೀಕೆರೆ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಅಮೃತಾಪುರ ಹೋಬಳಿಯ ನಾಡ ಕಛೇರಿಯನ್ನು ಹುಣಸಘಟ್ಟದಲ್ಲಿಯೇ ಮುಂದುವರೆಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.
3. **ಶ್ರೀ ಹೆಚ್.ಕೆ. ಕುಮಾರಸ್ವಾಮಿ** ಅವರು – ಹಾಸನ ತಾಲ್ಲೂಕು, ಗೊರೂರು ಗ್ರಾಮದಲ್ಲಿ ಹೇಮಾವತಿ ಜಲಾಶಯ ಯೋಜನೆಯ ನೌಕರರ ಹಿತದೃಷ್ಟಿಯಿಂದ ಆರೋಗ್ಯ ಇಲಾಖೆಯಿಂದ ಸ್ಥಾಪಿಸಲಾಗಿದ್ದ ಪ್ರಾಥಮಿಕ ಆರೋಗ್ಯ ಘಟಕವು ನಿರುಪಯುಕ್ತವಾಗಿರುವುದರಿಂದ ಸದರಿ ಪ್ರಾಥಮಿಕ ಆರೋಗ್ಯ ಘಟಕವನ್ನು ಕಟ್ಟಾಯ ಗ್ರಾಮದಲ್ಲಿ ಸ್ಥಾಪಿಸುವ ಬಗ್ಗೆ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಗಮನ ಸೆಳೆಯುವುದು.
4. **ಶ್ರೀ ಹೆಚ್.ಡಿ. ರೇವಣ್ಣ** ಅವರು – ಹಾಸನ ಜಿಲ್ಲೆಯ ಹೊಳೆನರಸೀಪುರ ವಿಧಾನಸಭಾ ಕ್ಷೇತ್ರದ ಚನ್ನರಾಯಪಟ್ಟಣ ತಾಲ್ಲೂಕು ದಂಡಿಗನಹಳ್ಳಿ ಹೋಬಳಿ ಕಾಚೇನಹಳ್ಳಿ ಏತ ನೀರಾವರಿ ಯೋಜನೆಯ 3ನೇ ಹಂತದ ಏತ ನೀರಾವರಿ ಯೋಜನೆಯ ಕುರಿತು ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರು ತದ್ವಿರುದ್ಧ ಪತ್ರಿಕಾ ಹೇಳಿಕೆ ನೀಡಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.
5. **ಶ್ರೀ ಸಾ.ರಾ ಮಹೇಶ್** ಅವರು – ಹೇಮಾವತಿ ಬಲಮೇಲ್ದಂಡೆ ನಾಲೆಯಲ್ಲಿ ಕೆ.ಆರ್. ನಗರ ಮತ್ತು ಕೆ.ಆರ್. ಪೇಟೆ ವಿಧಾನಸಭಾ ಕ್ಷೇತ್ರಗಳ ವ್ಯಾಪ್ತಿಯ ಉಪ ನಾಲೆಗಳಲ್ಲಿ ಸಮರ್ಪಕವಾಗಿ ನೀರನ್ನು ಹರಿಸುವ ಕುರಿತು ಹಾಗೂ ಸರ್ವೋಚ್ಛ ನ್ಯಾಯಾಲಯದ ಮಧ್ಯಂತರ ತೀರ್ಪಿನ ವಿರುದ್ಧವಾಗಿ ಹೊಸ ಏತ ನೀರಾವರಿ ಯೋಜನೆಗಳನ್ನು ಕೈಗೊಂಡು ಹಾಲಿ ಇರುವ ನಾಲೆಗಳ ಮೂಲಕ ರೈತರ ಅಚ್ಚುಕಟ್ಟುಗಳಿಗೆ ಹಾಗೂ ದನಕರುಗಳಿಗೆ ನೀರನ್ನು ಒದಗಿಸದೆ ಹೊಸ ಏತ ನೀರಾವರಿ ಯೋಜನೆಗಳನ್ನು ಕೈಗೊಳ್ಳುತ್ತೇವೆಂದು ಹೇಳಿ ಸರ್ಕಾರಕ್ಕೆ ನೂರಾರು ಕೋಟಿಗಳ ನಷ್ಟವುಂಟು ಮಾಡುತ್ತಿರುವ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.
6. **ಡಾ|| ಎ.ಬಿ. ಮಾಲಕರೆಡ್ಡಿ** ಅವರು ಯಾದಗಿರಿ ಜಿಲ್ಲೆಯಾದ್ಯಂತ ಬರದ ಛಾಯೆಯಿಂದ ಬಳಲುತ್ತಿರುವ ಜನ ಜಾನುವಾರುಗಳಿಗೆ ಕುಡಿಯುವ ನೀರನ್ನು ಒದಗಿಸುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
(http://kla.kar.nic.in/assembly/lob/lob.htm)